# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 1920 |
| ಸದಸ್ಯರ ಹೆಸರು | ಶ್ರೀ ಸೂರಜ್ ರೇವಣ್ಣ |
| ಉತ್ತರಿಸುವ ದಿನಾಂಕ | 16-03-2022 |
| ಉತ್ತರಿಸುವವರು | ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ಹಾಸನ ಜಿಲ್ಲೆ ಹೊಳೆನರಸೀಪುರ ಪಟ್ಟಣದಲ್ಲಿ ಸುಮಾರು 900 ವರ್ಷಗಳಷ್ಟು ಪುರಾತನವಾದ ಶ್ರೀ ಲಕ್ಷ್ಮೀನರಸಿಂಹ ಸ್ವಾಮಿ ದೇವಸ್ಥಾನವಿರುವುದು ನಿಜವೇ; ಸದರಿ ದೇವಸ್ಥಾನಕ್ಕೆ ದೂರದ ಬೆಂಗಳೂರು ಮತ್ತಿತರ ಊರುಗಳಿಂದ ಸಾವಿರಾರು ಸಂಖ್ಯೆಯಲ್ಲಿ ಭಕ್ತಾಧಿಗಳು ಆಗಮಿಸಿ ಪೂಜಾ ಕೈಂಕರ್ಯವನ್ನು ಕೈಗೊಳ್ಳುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು) | • ಹಾಸನ ಜಿಲ್ಲೆ, ಹೊಳೆನರಸೀಪುರ ಪಟ್ಟಣದಲ್ಲಿರುವ ಸುಮಾರು 900 ವರ್ಷಗಳಷ್ಟು ಪುರಾತನವಾದ ಶ್ರೀ ಲಕ್ಷ್ಮೀನರಸಿಂಹ ಸ್ವಾಮಿ ದೇವಸ್ಥಾನವಿರುವುದು ನಿಜವಾಗಿರುತ್ತದೆ.<br>• ಸದರಿ ದೇವಸ್ಥಾನಕ್ಕೆ ದೂರದ ಬೆಂಗಳೂರು ಮತ್ತಿತರ ಊರುಗಳಿಂದ ಸಾವಿರಾರು ಸಂಖ್ಯೆಯಲ್ಲಿ ಭಕ್ತಾಧಿಗಳು ಆಗಮಿಸಿ ಪೂಜಾ ಕೈಂಕರ್ಯವನ್ನು ಕೈಗೊಳ್ಳುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br>• ಸದರಿ ದೇವಾಲಯವು ಧಾರ್ಮಿಕ ದತ್ತಿ ಇಲಾಖೆಯ ಪ್ರವರ್ಗ 'ಸಿ' ಶ್ರೇಣಿಯ ದೇವಾಲಯವಾಗಿರುತ್ತದೆ ಹಾಗೂ ರಾಜ್ಯ ಪುರಾತತ್ವ ಇಲಾಖೆಯ ಅಧಿಸೂಚಿತ ಸಂಸ್ಥೆಯಾಗಿರುತ್ತದೆ. |
| ಆ) | ಸದರಿ ದೇವಸ್ಥಾನದ ಅಭಿವೃದ್ಧಿ ಕಾಮಗಾರಿಗಾಗಿ ಮುಜರಾಯಿ ಇಲಾಖೆ ವತಿಯಿಂದ ಈವರೆಗೂ ಯಾವುದೇ ಅನುದಾನ ಬಿಡುಗಡೆಯಾಗದಿರುವುದರಿಂದ ದೇವಸ್ಥಾನವು ಶಿಥಿಲಗೊಂಡು ಭಕ್ತಾಧಿಗಳಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು) | ಬಂದಿದೆ.<br>ಪುರಾತತ್ವ ಇಲಾಖೆಯ ವರದಿಯನ್ವಯ ರಾಜ್ಯ ಪುರಾತತ್ವ ಇಲಾಖೆಯಿಂದ ಈ ದೇವಾಲಯದ ಸಂರಕ್ಷಣಾ ಕಾಮಗಾರಿಯನ್ನು ಕೈಗೊಂಡಿದ್ದು, ದೇವಾಲಯದ ಉತ್ತರಭಾಗದ ಹಾಗೂ ಪಶ್ಚಿಮ ಭಾಗಗಳ ಸುಮಾರು 115.00 ಮೀ.ನಷ್ಟು ಉದ್ದದ ಕೋಟೆ ಗೋಡೆಯನ್ನು ಪುರಾತತ್ವ ಇಲಾಖೆಯ ನಿಯಮಾವಳಿಗಳ ರೀತ್ಯಾ ಸಂರಕ್ಷಿಸಲಾಗಿದೆ ದೇವಾಲಯದ ಒಟ್ಟಾರೆ ವಿಸ್ತೀರ್ಣವು 3515.00.ಚ.ಮೀ ಇದರಲ್ಲಿ ದೇವಾಲಯಗಳ ಸಮುಚ್ಛಯದ ವಿಸ್ತೀರ್ಣ 1705.00.ಮೀ.ಗಳಿರುತ್ತದೆ. ಉಳಿದಂತೆ 1810.00 ಚ.ಮೀ ನಷ್ಟು ವಿಸ್ತೀರ್ಣವು ತೆರದ ಜಾಗವಾಗಿದ್ದು, ಈ ಭಾಗದಲ್ಲಿ |

.....2

| | | |
|---|---|---|
| | | ರಥದ ಪಥಕ್ಕಾಗಿ 810.00 ಚ.ಮೀ "ಟೆಲಿಫೋನಿಕ್ ಬ್ಲಾಕ್ ಗ್ರಾನೈಟ್" ಹಾಗೂ ಉಳಿದ "Heavy duty Cobble" ಕಲ್ಲುಗಳನ್ನು ಹಾಕಿ ನೆಲಹಾಸು ಮಾಡಲಾಗಿದೆ. |
| ಇ) | ಹಾಗಿದ್ದಲ್ಲಿ, ಸದರಿ ದೇವಸ್ಥಾನದ ಅಭಿವೃದ್ಧಿ ಕಾಮಗಾರಿಗಾಗಿ ಅನುದಾನವನ್ನು ಮುಜರಾಯಿ ಇಲಾಖೆ ವತಿಯಿಂದ ಬಿಡುಗಡೆಗೊಳಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ? (ಸಂಪೂರ್ಣ ಮಾಹಿತಿ ನೀಡುವುದು) | ಈ ಬಗ್ಗೆ ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ ರವರಿಂದ ಈ ದೇವಸ್ಥಾನದ ಅಭಿವೃದ್ಧಿ ಕಾಮಗಾರಿಗೆ ಸಂಬಂಧಿಸಿದಂತೆ ಅನುದಾನ ಮಂಜೂರಾತಿ ಬಗ್ಗೆ ಪ್ರಸ್ತಾವನೆ ಸ್ವೀಕೃತವಾದ ನಂತರ ನಿಯಮಾನುಸಾರ ಮುಂದಿನ ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ: ಕಂಇ 82 ಮುಸಪು 2022

(ಶಶಿಕಲಾ. ಅ. ಜೊಲ್ಲೆ)
ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು